# ॥ ಶ್ರೀ ಗುರುದೇವ ದತ್ತ ॥

# ॥ ಶ್ರೀ ಗುರುಚರಿತ್ರೆ ಸಾರಾಂಶ ॥



**ಕೃತೆ ಜನಾದ ನೋ ದೇವೋ ತ್ರೇತಾಯಾ ರಘುನಂದನ।**
**ದ್ವಾಪಾರೆ ರಾಮಕೃಷ್ಣಂಚೆ ಕಲೌ ಶ್ರೀಪಾದವಲ್ಲಭಃ॥**

ಪೇಳುವೆ ಕೇಳಿ ಗುರುಚರಿತೆಯನು
ಅವನು ನುಡಿಸಿದಂತೆ
ಅಜ್ಞನು ನಾನು ಜ್ಞಾನವ ಪಡೆಯಲು
ನಿತ್ಯ ಸ್ಮರಿಸುತಿಹೆನು

ನಾಮಧಾರಕಗೆ ಸಿದ್ಧ ಮುನಿಗಳು
ಬೋಧಿಸಿದರು ಈ ಗುರುಚರಿತೆಯನು
ಚಾಚೂ ತಪ್ಪದೆ ಓದಿದಾತಗೆ
ಅಭಯ ಹಸ್ತವ ನೀಡಿಹರು

ಗುರುವಿನ ಸೇವೆಗೆ ಚ್ಯುತಿ ಬರದಿರಲೆಂದು
ದೀಪಕ ಬೇಡಿದ ವರವನ್ನು
ವೇದ ಧಮ ನು ಋಷಿಪಟ್ಟವನಾಗಿ
ದೀಪಕನನು ತಾ ಹರಸಿದನು

ಅಂಬರೀಷನು ಪಾರಣೆ ಗೈಯಲು
ದೂರ್ವಾಸನು ಆಗ ಬಂದಿಹನು
ಶಾಪವನಿಕ್ಕಲು ಹರಿ ಆಗಮಿಸೆ
ದಶಾವತಾರಕೆ ಕಾರಣನು

ಪಾತಿವೃತ್ಯದ ಸತ್ವ ಪರೀಕ್ಷೆಗಾಗಿ
ತ್ರಿಮೂರ್ತಿಗಳು ಧರೆಗಿಳಿದಿಹರು
ಅನಸೂಯೆಯ ಪತಿ ಪರಾಯಣತೆ ಕಂಡು
ದತ್ತನ ರೂಪದಿ ತಾವೇ ಜನಿಸಿಹರು

ಅಪಳರಾಜ, ಸುಮತಿ ದಂಪತಿಗಳ
ಕಂದನಾಗಿ ದತ್ತನು ಬಂದಾ ಆ-
ಪ್ರೀತಿಯ ಕುವರಗೆ ಶ್ರೀಪಾದನೆಂದು
ಕರೆದರು ಸಂತಸದಿಂದಾ

ಶಿವನಿಂದ ಪಡೆದು ಆತ್ಮಲಿಂಗವನು
ರಾವಣ ಲಂಕೆಗೆ ಹೊರಟಿಹನು
ಮಾಗ ಮಧ್ಯದಿ ಗಣಪತಿ ಕೂಡಲು
ಗೋಕಣ ಕ್ಷೇತ್ರವಾಗಲು ಕಾರಣನು

ವೇಶ್ಯೆಯಾಗಿ ಕುಡಿತಕೆ ತೊಡಗಿ
ಭಿಕ್ಷುಕಳಾಗಿ ಸೌಮಿನಿ ಇರಲು
ತಟ್ಟೆಲಿ ಬಿದ್ದ ಬಿಲ್ವ ಪತ್ರಿಯನು
ಲಿಂಗಕೆ ಎಸೆದು ಪುನೀತಳಾಗಿಹಳು

ತಾಯಿ ಅಂಬಿಕೆ ಮಗನೊಡಗೂಡಿ
ನೀರಲಿ ಮುಳಗುದ ನೋಡಿದ ಗುರುಗಳು
ವರದ ಹಸ್ತವ ಮಗನ ತಲೆಗೆ ತಗುಲಿಸೆ
ತತ್ಕಾಲದಿ ಪ್ರಕಾಂಡ ಪಂಡಿತನಾಗಿಹನು

ರಜಕನು ಒಮ್ಮೆ ನದಿ ತೀರದಲಿ
ರಾಜನ ವೈಭವ ನೋಡಿದನು
ಇಚ್ಛೆಯ ಪಟ್ಟು ಗುರುಗಳ ವರದಿಂ
ತಾ ರಾಜನಾಗಲು ಬಯಸಿದನು

ವಲ್ಲಭೇಶನನು ಕೊಂದು ಕಳ್ಳರು
ಇದ್ದ ಹಣವನು ದೋಚಿದರು
ಶ್ರೀಪಾದ ಗುರುಗಳು ಪ್ರತ್ಯಕ್ಷರಾಗಿ
ಅವಗೆ ಮರುಜನ್ಮವನೇ ನೀಡಿದರು

ಅಂಬಾ ಮಾಧವರ ಪ್ರೀತಿಯ ಕುವರನೆ
ನರಹರಿ ರೂಪದಿ ಜನಿಸಿಹನು
ಉಪನಯನ ದಿನವೇ ನಾಲ್ಕು ವೇದಗಳ
ಅನ್ನುತ ಅಚ್ಚರಿ ಪಡಿಸಿಹನು

ಸನ್ಯಾಸ ಬಯಸಿ ಮಾತಾ-ಪಿತರ ಆಜ್ಞೆಯ
ಪಡೆದು
ಕಾಶೀಯಾತ್ರೆಗೆ ಹೊರಟಿಹನು
ವೃದ್ಧ ಕೃಷ್ಣ ಸರಸ್ವತಿಯಿಂದ ದೀಕ್ಷೆಯ
ಪಡೆದು
ನರಸಿಂಹ ಸರಸ್ವತಿ ಎನಿಸಿಹನು

ಉದರ ಶೂಲೆಯ ಬ್ರಾಹ್ಮಣನೊಬ್ಬ
ಜೀವವ ತೊರೆಯಲು ಹಾತೊರೆದ
ಗುರುಗಳು ಅವಗೆ ಮೃಷ್ಟಾನ್ನ ಉಣಿಸಿ
ಅನ್ನವನೆ ಔಷಧಿ ಮಾಡಿಹರು

ಯವನ ರಾಜನು ಸಾಯಂದೇವನ
ಕೊಲ್ಲಲು ತಾನು ಕರೆಸಿಹನು
ಗುರುಗಳ ನೆನೆಸಿದ ಸಾಯಂದೇವಗೆ
ಸಜೀವ ಸನ್ಮಾನ ದೊರೆತಿಹುದು

ಗುರುಗಳ ಖ್ಯಾತಿಯು ಬೆಳೆಯುತಲಾಗಿ
ನಾಲ್ಕೂ ಕಡೆಗೂ ಹಬ್ಬಿಹುದು
ದರುಶನಕಾಗಿ ವೈಜನಾಥದಲ್ಲಿರಲು
ಗುಪ್ತವಾಸವೇ ಲೇಸೆನಿಸಿಹುದು

ಅರುಣ, ಬೈದ, ಉಪಮನ್ಯು ತೆರದಿ
ಗುರುಸೇವೆಯನು ಮಾಡುತಲಿರಲು
ಸಕಲ ಪಾಪಗಳು ನಾಶವಾಗುತಲಿ
ಅವಿರತ ಸುಖವದು ನೆಲೆಸುವದು

ಭಿಲ್ಲವಾಡದಲಿ ಮಂದಮತಿಯು ತಾ
ಭುವನೇಶ್ವರಿಯನು ಕಂಡಿರಲು
ಗುರುಗಳ ಬಳಿಗೆ ಸಾಗಲು ಅವನಿಗೆ
ಅನುಗ್ರಹ ಅವಳು ಮಾಡಿಹಳು

ಅಮರವಾಡದಲಿ ಬ್ರಾಹ್ಮಣನೊಬ್ಬ
ಅವರೆಕಾಯಿ ಪಲ್ಯ ನೀಡಿದ ಭಿಕ್ಷೆಯ
ಆ ಬಳ್ಳಿಯ ಬುಡದಲಿ ಚಿನ್ನವ ತೋರಿ
ಬದುಕನು ಬಂಗಾರ ಮಾಡಿಹರು

ಯೋಗಿನಿಯರಿಗೆ ಅಭಯವ ನೀಡಿ
ಗಂಗಾನುಜನಿಗೆ ಅನುಗ್ರಹ ಮಾಡಿ
ಕ್ಷಣದಲ್ಲಿ ಕಾಶಿಯ ತೋರಿದ ಗುರುಗಳು
ಔದುಂಬರದಲಿ ನೆಲೆಸಿಹರು

ಪಿಶಾಚಿ ಬಾಧೆಯು ಸಾಧ್ವಿಗೆ ಇರಲು
ಹುಟ್ಟಿದ ಮಕ್ಕಳು ಸಾಯುತಲಿದ್ದರು
ಗುರುಗಳ ವರದಿಂ ಜನಿಸಿದ ಮಗನೂ
ಇಹಯಾತ್ರೆಯನು ಮುಗಿಸಿಹನು

ಶವಸಂಸ್ಕಾರಕೆ ಮಗನನು ಕೊಡಲು
ಒಪ್ಪದೆ ಮಾತೆಯು ಅಳುತಿಹಳು
ಯತಿಗಳು ನೀಡಿದ ಜೀವಕಳೆಯಿಂದ
ಆಕಂದನು ಸಜೀವನಾಗಿಹನು

ಬಡವನ ಮನೆಯಲಿ ಬರಡೆಮ್ಮೆಯು
ಹಾಲನು ಹಿಂಡದೆ ನಿಂತಿಹುದು ಅದಕೆ
ಗುರುಗಳ ದಿವ್ಯ ದೃಷ್ಟಿಯು ಬೀಳಲು
ಎಮ್ಮೆಯು ಹಾಲನು ಕರೆದಿಹುದು

ಗುರುಗಳ ಮಹತಿಯು ಹಬ್ಬಿರಲು
ರಾಜನು ದರುಶನ ಪಡೆದಿಹನು
ಬ್ರಹ್ಮರಾಕ್ಷಸಗೆ ಮುಕ್ತಿಯ ನೀಡಿ ಕ್ಷೇತ್ರ
ಗಾಣಗಾಪುರದಿ ನೆಲೆಸಿಹರು

ಕುಮಸಿ ಗ್ರಾಮದಿ ತ್ರಿವಿಕ್ರಮ ಯತಿಯು
ಗುರುಗಳ ನಿಂದನೆ ಮಾಡುತಲಿರಲು
ವಿಶ್ವರೂಪವ ತೋರಿದ ಗುರುಗಳು
ಆತಗೆ ಜ್ಞಾನೋದಯವ ನೀಡಿದರು

ಪಂಡಿತರಿಬ್ಬರು ವಾದವ ಮಾಡಲು
ಕುಮಸಿ ಗ್ರಾಮಕೆ ತೆರಳಿಹರು
ತ್ರಿವಿಕ್ರಮ ಯತಿಯನು ಕೆದಕುತ ಅವರು
ಜಯಪತ್ರವನೇ ಕೇಳಿಹರು

ತ್ರಿವಿಕ್ರಮ ಯತಿಯು ಪಂಡಿತರನ್ನು
ಗುರುಗಳ ಬಳಿಗೆ ಕರೆದೊಯ್ದು
ಗುರುಗಳ ಮಾತನು ಕೇಳದೇ ಅವರು
ವಾದಕೆ ಹಟವನು ಮಾಡಿಹರು

ಬೀದಿಲಿ ಹೋಗುವ ಚಾಂಡಾಲನನ್ನು
ಗುರುಗಳ ಹತ್ತಿರ ಕರೆಸಿಹರು
ಭಸ್ಮವ ಲೇಪಿಸಿ ಆಶೀವ ದಿಸಿ
ವೇದದ ವಾದಕೆ ಹಚ್ಚಿಹರು

ಪತಿತನ ಮೈಗೆ ಭಸ್ಮವು ತಗುಲೆ
ಹೆಂಡತಿ ಮಕ್ಕಳು ಮರೆತಿಹನು
ಭಸ್ಮವ ತೊಳಿಸಿ ನಿಜ ಸ್ಥಿತಿ ತರಿಸಿ
ಭಸ್ಮದ ಮಹಿಮೆಯ ತೋರಿಹರು

ವಾಮದೇವನನು ತಿನ್ನಲು ಹವಣಿಸಿ
ರಾಕ್ಷಸವೊಂದು ಬಂದಿಹುದು
ಭಸ್ಮವು ತಗುಲಿ ನಿಜರೂಪ ತಾಳಿ
ವಿದೇಹ ಮುಕ್ತಿಯ ಹೊಂದಿಹನು

ಸತಿ ಪತಿ ಕೂಡಿ ಗುರುವನು ಕಾಣಲು
ಗಾಣಗಾಪುರಕೆ ಹೊರಟಿಹರು
ಗುರುವನು ಕಾಣದೆ ನಡು ದಾರಿಯಲಿ
ಪತಿಯು ವಿಧಿವಶವಾಗಿಹನು

ಅತ್ತೂ ಕರೆದು ಗುರುವನು ನಿಂದಿಸಿ
ಹುಚ್ಚಳಂತೆ ಪತಿ ಸುತಿಹಳು
ಗುರುಗಳು ಬಂದು ಬೋಧನೆ ಮಾಡಿ
ರುದ್ರಾಕ್ಷಿ ಮಂತ್ರಿಸಿ ಕೊಟ್ಟಿಹರು

ರುದ್ರಾಕ್ಷಿ ಕಟ್ಟಲು ಶವವಾದ ಪತಿಯು
ಉಸಿರಾಟಕ್ಕೆ ತೊಡಗಿಹನು
ಬೆಚ್ಚುತ ಜನರು ಮೆಚ್ಚುತ ಗುರುವನು
ಜೈಜೈ ಕಾರವ ಮಾಡಿಹರು

ವೇಶ್ಯೆಯು ಪಡೆದ ರುದ್ರಾಕ್ಷಿಗಳನ್ನು
ಕೋಳಿ ಮಂಗಗೆ ಕಟ್ಟಿಹಳು ಮರುಜನ್ಮದಿ
ರುದ್ರಾಕ್ಷಿ ಧರಿಸಿದ ಪ್ರಾಣಿಗಳೆರಡೂ
ಮಂತ್ರಿ ರಾಜರ ಸುತರಾಗಿಹರು

ಪರಾಶರ ಮುನಿಗಳು ರಾಜನಿಗೆ
ರುದ್ರಾಧ್ಯಾಯ ಮಹಿಮೆ ತಿಳಿಸಿದರು
ಅಭಿಮಂತ್ರಣ ಜಲವನು ಪ್ರೋಕ್ಷಿಸಲು
ಸುಧಮ ನು ಎಚ್ಚರಗೊಂಡಿಹನು

ಕಚದೇವಯಾನಿಯ ಸರಸದ ಕತೆಯು
ವಿರಸದಲಿ ಕೊನೆಗೊಂಡಿಹುದು
ಸೀಮಂತಿನಿ ಚಂದ್ರಾಂಗದ ಮಿಲನವು
ಸೋಮವಾರ ವೃತದ ಫಲವಾಗಿಹುದು

ಬ್ರಾಹ್ಮಣ ಪತ್ನಿಯು ಪರಾನ್ನದಲ್ಲಿ
ಹಂದಿ ನಾಯಿಗಳ ಕಂಡಿಹಳು
ಒಲ್ಲದ ಮನಸಿನ ಪತಿಗೆ ಗುರುಗಳು
ಆಚಾರಧಮ ವ ಬೋಧಿಸಿಹರು

ಆಚಾರ ಧಮ ವ ತಿಳಿಸುತ ಗುರುಗಳು
ನೀತಿ ನೇಮವ ಅರುಹಿದರು
ಅದೇ ದಾರಿಯಲಿ ನಡೆದವಗೆಂದೂ
ದೈನ್ಯವೇ ಇಲ್ಲವೆಂದು ಹೇಳಿಹರು

ಭಾಸ್ಕರ ಬ್ರಾಹ್ಮಣ ಪಾಕವ ಇಳಿಸಿ
ಎಲ್ಲರಿಗೌತಣ ನೀಡಿಹನು
ಮೂರು ಜನರಿಗೆ ಮಾಡಿದ ಅಡಿಗೆಯ
ಅನ್ನವು ಅಕ್ಷಯವಾಗಿಹುದು

ಬಂಜೆಯಾದ ಸಾಧ್ವಿಯು ತಾನು
ಸಂತಾನಕಾಗಿ ಕೊರಗುತಲಿಹಳು
ಇಳಿವಯದಲ್ಲಿ ಮಕ್ಕಳ ನೀಡಿ
ಮನೆಯನು ನಂದನವನ ಮಾಡಿಹರು

ಕುಷ್ಠ ರೋಗಿಯು ನೆಟ್ಟಿರುವ ಒಣ
ಕಾಷ್ಠವು ಚಿಗುರಿದಂತೆ ನಿರೋಗಿಯಾಗಿ
ನಿಷ್ಠೆಯಿಂದ ತಾ ಪದ್ಯವ ರಚಿಸಿ
ಯೋಗಿಶ್ವರನಾಗಿ ಮೆರೆದಿಹನು

ಸಾಯಂದೇವನು ಸೇವೆಯ ಮಾಡುತ
ಗುರುಗಳ ಬಳಿಗೆ ಇರುತಿಹನು
ಗುರುವಿನ ಸೇವೆಯು ಕಠಿಣವೆಂದು
ಸಂಗಮದಲಿ ತಾ ಅರಿತಿಹನು

ವಿನಯಶೀಲನು ಅವಧೂತರ
ದರುಶನವನ್ನು ಪಡೆದಿಹನು
ವಿಶ್ವನಾಥನ ಅನುಗ್ರಹದಿಂದ
ವಿಶ್ವಕಮ ನಾಗಿ ಮೆರೆದಿಹನು

ಸಾಯಂದೇವನು ಸಂಸಾರದೊಂದಿಗೆ
ಗಾಣಗಾಪುರದಿ ನೆಲೆಸಿಹನು
ಅನಂತ ವ್ರತದ ಮಹಿಮೆಯ ಅರಿಯುತ
ಗುರುಗಳ ಪೂಜೆಯ ಮಾಡಿಹನು

ತಂತುಕನೊಬ್ಬನಿಗೆ ಕ್ಷಣ ಮಾತ್ರದಲ್ಲಿ
ಶ್ರೀಶೈಲ ದಶ ನವಾಗಿಹುದು
ಗುರುವಿನ ನಂಬಿ ನಡೆದವಗೆಂದೂ
ಶಾಶ್ವತ ಸುಖವದು ಲಭಿಸುವದು

ನಂದಿಯು ತನ್ನ ಕುಷ್ಠವ ಕಳೆಯಲು
ಗುರುಗಳ ಮೊರೆಯನು ಹೊಕ್ಕಿಹನು
ಕುಷ್ಠವ ಕಳೆಯುತ ಗುರುಗಳು
ಅವನಿಗೆ ಕವೀಶ್ವರನೆಂದು ಕರೆದಿಹರು

ನರಕೇಸರಿಯು ನಿತ್ಯ ನೇಮದಲಿ
ಕಲ್ಲೇಶ್ವರನನು ಪೂಜಿಸುತಿಹನು
ಕಲ್ಲೇಶ್ವರನಲ್ಲೇ ಗುರುಗಳ ಕಂಡು
ಅಸಂಖ್ಯ ಪದ್ಯಗಳ ರಚಿಸಿಹನು

ಅಷ್ಟ ರೂಪಗಳ ಧಾರಣ ಮಾಡುತ
ಅಲ್ಲೆಲ್ಲಾ ಗುರು ಕಂಡಿಹನು
ಇಷ್ಟ ಪಟ್ಟವರ ಮನೆಗೆ ತೆರಳುತ
ದೀವಳಿಗೆಯಲಿ ಪೂಜೆ ಪಡೆದಿಹನು

ಜೋಳದ ಪೀಕನು ಬೆಳೆದಾ ರೈತಗೆ
ಕೊಯ್ಯಲು ಗುರುಗಳು ಹೇಳಿಹರು
ಗುರುಗಳ ಮಾತನು ನಡೆಸಿದ ಅವಗೆ
ಅತ್ಯಧಿಕ ಫಸಲು ಬಂದಿಹುದು

ರತ್ನಾಯಿಯು ಗುರುಗಳ ಕಂಡು
ಕುಷ್ಠವ ಕಳೆಯಲು ಹಾತೊರೆದಿಹಳು
ಪಾಪ ವಿನಾಶಿಯಲಿ ಮಿಂದಲು ಹೇಳಿ
ಗಾಣಗಾಪುರ ಮಹತಿಯ ತಿಳಿಸಿಹರು

ಬೀದರ ರಾಜನು ಹಿಂದಿನ ಜನ್ಮದಿ
ತಾನೇ ರಜಕನೆಂದರಿತಿಹನು
ಯತಿಗಳ ದಶ ನ ಪಡೆಯುತ ಅವನು
ಸಂತಸದಿಂದಲಿ ಮೆರೆದಿಹನು

ನಿಜಾನಂದದಲಿ ಮಗ್ನವಾಗಲು
ಶ್ರೀಶೈಲಕ್ಕೆ ತೆರಳಿದ ಗುರುಗಳು
ಭಕ್ತರಿಗೆಲ್ಲಾ ಪ್ರಸನ್ನರಾಗುತಲಿ
ಗಾಣ್ಗಾಪುರದಲಿ ನೆಲೆ ನಿಂತಿಹರು

ಪುಷ್ಪಾಸನದಿ ಕುಳಿತು ಗುರುಗಳು
ಪಾತಾಳ ಗಂಗೆಯ ತಲುಪಿಹರು
ಪ್ರಸಾದ ಪುಷ್ಪವ ಕಳಿಸುತ ಅವರು
ಕದಳೀವನದಲಿ ಗುಪ್ತರಾದರಾ ಯತಿವರರು

ಸಿದ್ಧಮುನಿಗಳು ನಾಮಧಾರಕಗೆ
ಅವತರಣಿಕೆಯನ್ನು ಅರುಹಿದರು
ಅಮೃತರೂಪಿ ಗುರುಚರಿತೆಯನು
ಜಗದೋದ್ಧಾರಕೆ ನೀಡಿಹರು

ದತ್ತನೆ ಮಾಡಿದ ಪ್ರೇರಣೆಯಿಂದ
ಚಿತ್ತಕೆ ಹೊಳೆದುದ ಬರೆದಿರುವೆ
ನಿತ್ಯವು "ಅವನ" ಸೇವೆಯು
ದೊರೆಯಲು
ದತ್ತತನಯನಿಂದಪಿ ತವು

॥ ಮಂಗಳ ॥